ಒಂದಾಣೆ ಮಾಲೆ. **128**

# ಭಾರತದ ಸಂಗೀತ ಜ್ಯೋತಿಗಳು

(ಭಾಗ ೧)



ಬೆಲೆ: ಆಣೆ ೧. ಲೇ: ಎಚ್. ಸುಂದರರಾಮ ರಾವ್.

ಒಂದಾಣೆ ಮಾಲೆ — ಮಂಗಳೂರು

# ಭಾರತದ ಸಂಗೀತ ಜ್ಯೋತಿಗಳು

## ೧. ಶ್ರೀ ಪುರಂದರದಾಸರು

ಭಾರತದ ಸಂಗೀತ ವಿಭೂತಿಗಳ ನಾಮಾವಳಿಯಲ್ಲಿ ಶ್ರೀ ಪುರಂದರ ದಾಸರ ಪವಿತ್ರ ಹೆಸರು ಅಮರವಾಗಿರುವುದು. ಇವರ ದಿವ್ಯ "ದೇವರ ನಾಮ" ಪದಗಳು ನಮ್ಮ ಕನ್ನಡನಾಡಿನ ಎಲ್ಲೆಡೆಗಳಲ್ಲಿಯೂ ನಡೆಯುವ ಭಜನಾ ಮಂಡಳಿಗಳಲ್ಲಿ, ಹರಿಕೀರ್ತನೆಗಳಲ್ಲಿ, ಸಂಗೀತ ಖಚೇರಿಗಳಲ್ಲಿ ಅವರ್ಜನೀಯವೆನಿಸಿ, ಜನಪ್ರಿಯವಾಗಿವೆ. ಉತ್ತರ ಹಿಂದುಸ್ಥಾನದಲ್ಲಿ ತುಲಸೀ ದಾಸ ಮತ್ತು ಕಬೀರ್ ದಾಸರ, ತಥಾ ಮಹಾರಾಷ್ಟ್ರದಲ್ಲಿ ರಾಮದಾಸ ಮತ್ತು ತುಕಾರಾಮರ ಸ್ಥಾನವು ದಕ್ಷಿಣ ಹಿಂದುಸ್ಥಾನದಲ್ಲಿ ಪುರಂದರ ದಾಸ ಮತ್ತು ಕನಕದಾಸರಿಗೆ ಸಲ್ಲುವದು. ಪುರಂದರ ದಾಸರು ಪರಮ ಭಗವದ್ಭಕ್ತರೂ, ಪ್ರತಿಭಾಶಾಲಿ ಸಂಗೀತಜ್ಞರೂ, ಶ್ರೇಷ್ಠ ಕನ್ನಡ ಸಾಹಿತ್ಯರಚಯಿತರೂ, ಉತ್ಕೃಷ್ಟ ಕಲಾವಂತರೂ, ಅಲ್ಲದೆ ಪ್ರಾಸಾದಿಕ ಕವಿವರರೂ ಆಗಿದ್ದರು. ಇವರ ಪ್ರಾಮಾಣಿಕ ಆಧಾರಬದ್ಧ ಜೀವನಚರಿತ್ರೆಯು ಪೂರ್ಣಲಭ್ಯವಾಗಿಲ್ಲವಾದರೂ ಹಲವು ಲೇಖನಗಳ ಪಾಠಾಂತರಗಳಿಂದ ಪೋಣಿಸಿದ ಈ ಚರಿತ್ರೆಯು ಸುರಸವಾಗಿರುವುದು.

ಕ್ರಿಸ್ತಶಕ ಹದಿನೈದನೇ ಶತಮಾನದ ಉತ್ತರಾರ್ಧದಲ್ಲಿ ಪಂಢರಾಪುರದ ಉತ್ತರಕ್ಕಿರುವ ಐತಿಹಾಸಿಕ ಪ್ರಸಿದ್ಧ ಪುರಂದರ ಗಡದಲ್ಲಿ ಶ್ರೀಮಂತ ನವರತ್ನದ ವ್ಯಾಪಾರಿ ವಿಠ್ಠಲ ಪಂತನೆಂಬವನಿದ್ದನು. ಈತನಿಗೆ ಲಕ್ಷ್ಮೀಬಾಯಿಯೆಂಬ ಸಾಧ್ವಿಯು ಪತ್ನಿಯಾಗಿದ್ದಳು. ಬಹುಕಾಲದ ವರೆಗೂ, ಸಂತತಿಯಾಗದಿರುವುದರಿಂದ ಆ ದಂಪತಿಗಳು ಪುತ್ರಾಕಾಂಕ್ಷೆಯಿಂದ ಪಂಢರಾಪುರದ ಯಾತ್ರೆಯನ್ನು ಮಾಡಿ ತಮ್ಮ ಇಷ್ಟಾರ್ಥಸಿದ್ಧಿಗಾಗಿ ಭಗವಂತನನ್ನು ಪ್ರಾರ್ಥಿಸುತ್ತಿರಲು, ಶ್ರೀ ಪಾಂಡುರಂಗ ವಿಠ್ಠಲನು ಸ್ವಪ್ನದಲ್ಲಿ ಸಾಕ್ಷಾತ್ಕರಿಸಿ ಸುಪುತ್ರ ವರದಾನವಿತ್ತಂತೆ ಭಾಸವಾಯಿತು. ಕೆಲವು ಸಮಯದಲ್ಲಿಯೇ ಲಕ್ಷ್ಮೀಬಾಯಿಯು ಗರ್ಭವತಿಯಾದಳು — ಪುತ್ರೋದಯವಾಯಿತು — ಶಿಶುವಿಗೆ ಶ್ರೀನಿವಾಸ ವಿಠ್ಠಲನೆಂಬ ನಾಮಕರಣ ಮಾಡಿದರು.

ವಿಠ್ಠಲ ಪಂತನ ವ್ಯಾಪಾರವು ದಿನೇ ದಿನೇ ವೃದ್ಧಿಗೊಂಡಿತು. ಶ್ರೀನಿವಾಸನು ಶ್ರೀಮಂತಿಕೆಯಲ್ಲಿ ಬೆಳೆದನು. ಪ್ರಾಯ ತುಂಬುತ್ತಲೇ ಸರಸ್ವತಿ ಯೆಂಬ ಕನ್ಯೆಯನ್ನು ವಿವಾಹವಾಗಿ ಅಂದಿನ ದಕ್ಷಿಣ ಭಾರತದ ರಾಜಧಾನಿಯಾಗಿದ್ದ ವಿಜಯನಗರ(ಹಂಪಿ, ಅಥವಾ ಪ್ರಾಚೀನ ಪೌರಾಣಿಕ ಕಿಷ್ಕಿಂಧಾ) ಪಟ್ಟಣದಲ್ಲಿ ಮುತ್ತು ರತ್ನದ ಅಂಗಡಿಯನ್ನಿಟ್ಟು ವಿಪುಲ ಐಶ್ವರ್ಯವನ್ನು ಗಳಿಸಿದನು ಲಕ್ಷ್ಮೀಪುತ್ರನಾದ ಶ್ರೀನಿವಾಸನು ಅತಿ ಕೃಪಣನಾಗಿದ್ದರೂ ಆತನ ಭಾರ್ಯೆ ಸರಸ್ವತಿಯು ದಾನಶೀಲಸಂಪನ್ನೆಯಾಗಿದ್ದಳು.

ಒಂದು ದಿನ ಒಬ್ಬ ಬ್ರಾಹ್ಮಣ ಭಿಕ್ಷುಕನು ಶ್ರೀನಿವಾಸನ ಮನೆಗೆ ಬಂದು "ಸ್ವಾಮಿ, ಮಗನಿಗೆ ಬ್ರಹ್ಮೋಪದೇಶ ಕೊಡಬೇಕೆಂದು ನಿಶ್ಚಯಿಸಿದ್ದೇನೆ. ಬಡ ಬ್ರಾಹ್ಮಣನ ಮೇಲೆ ಕರುಣೆಯಿಟ್ಟು ಸ್ವಲ್ಪ ಧನಸಹಾಯವನ್ನು ಮಾಡಬೇಕು" ಎಂದು ಬೇಡಿಕೊಂಡನು. ಶ್ರೀನಿವಾಸನು ಅನೇಕ ನೆವನಗಳನ್ನು ಹೇಳಿ, ಕಡೆಗೆ ಕುಪಿತನಾಗಿ, ಒಳಗಿನಿಂದ ಸವೆದ ದುಗ್ಗಾಣಿಗಳ ಒಂದು ಚೀಲವನ್ನು ತಂದು ಸುರಿಸಿ, "ಇಗೋ, ಇದರಿಂದ ಒಂದೇ ಒಂದನ್ನು ಆರಿಸಿ ತೆಗೆದುಕೊಂಡು ಹೋಗು!" ಎಂದನು. ಬ್ರಾಹ್ಮಣನು ನಿರಾಶನಾಗಿ ಹೊರಟನು. ಆದರೆ, ಸ್ವಲ್ಪ ದೂರ ಹೋಗುತ್ತಲೇ ಶ್ರೀನಿವಾಸನು ಮನೆಯಿಂದ ಹೊರಟು ಹೋದುದನ್ನು ನೋಡಿ, ಹಿಂತಿರುಗಿ ಬಂದು ಸಾಹುಕಾರನ ಪತ್ನಿಯೊಡನೆ ತನ್ನ ಸಂಕಷ್ಟವನ್ನು ಹೇಳಿಕೊಂಡನು. ಒಡನೆ ಸರಸ್ವತಿಯು ತನ್ನ ವಜ್ರದ ಮೂಗುತಿಯನ್ನು ಕಳಚಿ ಬ್ರಾಹ್ಮಣನಿಗೆ ಸಂತೋಷದಿಂದ ದಾನವಾಗಿ ಕೊಟ್ಟಳು.

ಮೂಗುತಿಯನ್ನು ಹಿಡಕೊಂಡು ಬ್ರಾಹ್ಮಣನು ನೆಟ್ಟಗೆ ಶ್ರೀನಿವಾಸನ ಅಂಗಡಿಗೇ ಹೋಗಿ ಕ್ರಯ ಕಟ್ಟಿಸಲು, ಶ್ರೀನಿವಾಸನು ಅದರ ಗುರುತು ಹಿಡಿದು, ಅದನ್ನು ತನ್ನ ಪೆಟ್ಟಿಗೆಯೊಳಗೆ ಭದ್ರವಾಗಿಟ್ಟು, ಬ್ರಾಹ್ಮಣನಿಗೆ ಅಲ್ಲಿಯೇ ಕುಳ್ಳಿರಿಸಿ, ಹಣ ತರುವ ನೆವನದಿಂದ ಮನೆಗೆ ಹೋಗಿ, ತನ್ನ ಪತ್ನಿಯೊಡನೆ "ನಿನ್ನ ಮೂಗುತಿ ಎಲ್ಲಿದೆ? ಎಂದು ದಿಟ್ಟಿಸಿ ಕೇಳಿದನು. "ಮೂಗುತಿಯನ್ನು ಒಳಗೆ ತೆಗೆದಿಟ್ಟಿದ್ದೇನೆ" ಎಂದು ಹೇಳಲು, ಶ್ರೀನಿವಾಸನು ಮತ್ತಷ್ಟು ಕೋಪಿಸಿ, "ಈಗಲೇ ಅದನ್ನು ತಂದು ಕೊಡಬೇಕು" ಎಂದು ಕಟ್ಟಪ್ಪಣೆಯನ್ನಿತ್ತನು. ಸರಸ್ವತಿಯು ತನ್ನ ಪತಿಯ ಬಾಯಿಯಿಂದ ಪಾರಾಗುವ ಬಗೆ ಕಾಣದೆ ಆತ್ಮಹತ್ಯ ಮಾಡಿಕೊಳ್ಳಲು ಒಳಗೆ ಹೋಗಿ

ಬಟ್ಟಲಲ್ಲಿ ವಿಷವನ್ನೆರೆದು ದೇವರ ಧ್ಯಾನವನ್ನು ಮಾಡುತ್ತಾ ಅದನ್ನು ಕುಡಿಯುವಷ್ಟರಲ್ಲಿ ಮೂಗುತಿಯು ಬಟ್ಟಲಲ್ಲಿ ಕಾಣಿಸಿತು! ಪರಮಾತ್ಮನ ಈ ಅಗಾಧ ಮಹಿಮೆಯನ್ನು ಕೊಂಡಾಡುತ್ತ ಮೂಗುತಿಯನ್ನು ತನ್ನ ಪತಿಗೆ



ತಂದುಕೊಟ್ಟಳು. ಶ್ರೀನಿವಾಸನು ವಿಸ್ಮಿತನಾಗಿ ಇದನ್ನು ಹಿಡಿದುಕೊಂಡು ತನ್ನ ಅಂಗಡಿಗೆ ಹೋಗಿ ನೋಡಲು, ಅಲ್ಲಿ ಬ್ರಾಹ್ಮಣನೂ ಇದ್ದಿಲ್ಲ! ತನ್ನ ಪೆಟ್ಟಿಗೆಯೊಳಗೆ ಬಚ್ಚಿಟ್ಟ ಮೂಗುತಿಯೂ ಇದ್ದಿಲ್ಲ! ಈ ಮಹದಾಶ್ಚರ್ಯದ

ಅಲೌಕಿಕ ಘಟನೆಯಿಂದ ಶ್ರೀನಿವಾಸನಿಗೆ ಆಧ್ಯಾತ್ಮಿಕ ಪರಿವರ್ತನೆಯಾಗಿ, ಇದೆಲ್ಲಾ ದೇವರ ಮಹಿಮೆಯು – ಪರಮಾತ್ಮನೇ ಆ ಬ್ರಾಹ್ಮಣನ ರೂಪ ದಲ್ಲಿ ತನಗೆ ಬುದ್ಧಿ ಕಲಿಸಲು ಬಂದಿದ್ದನೆಂಬ ಜ್ಞಾನೋದಯವಾಯಿತು. ಒಡನೆ ವೈರಾಗ್ಯವನ್ನು ತಾಳಿ ತನ್ನ ಐಶ್ವರ್ಯವನ್ನೆಲ್ಲಾ ಬಡಬಗ್ಗರಿಗೆ ದಾನ ಮಾಡಿ ಸರ್ವತ್ಯಾಗಿಯಾದನು.

ಈ ಸಮಯದಲ್ಲಿ ಮಹಾ ಸಂಗೀತಜ್ಞರಾದ ವ್ಯಾಸತೀರ್ಥ ಸ್ವಾಮಿ ಗಳು ವಿಜಯನಗರದಲ್ಲಿದ್ದರು. ಶ್ರೀನಿವಾಸನು ಆ ಸದ್ಗುರುಗಳಿಂದ ಉಪ ದೇಶವನ್ನು ಪಡೆದು ಅವರ ಶಿಷ್ಯನಾಗಿ ಹರಿಕಥಾ ಸಂಕೀರ್ತನ, ಮತ್ತು ಸಂಗೀತ ಶಾಸ್ತ್ರಗಳ ಅಭ್ಯಾಸಮಾಡಿ, ದೇಶದಲ್ಲಿ ಭಗವದ್ಭಕ್ತಿ ಹರಡುವಂತೆ ಸಾವಿರಾರು ಭಕ್ತಿಪರ ಪದಗಳನ್ನು ರಚಿಸಿ, ನಿತ್ಯವೂ ಆ ಕೀರ್ತನೆಗಳನ್ನು ಹಾಡುತ್ತ, ತನ್ನ ಪತ್ನಿಯೊಡನೆ ದೇಶಸಂಚಾರ ಮಾಡುತಿದ್ದು, ಸ್ವಲ್ಪ ಸಮಯ ದಲ್ಲಿಯೇ "ಪುರಂದರದಾಸ"ನೆಂಬ ಹೆಸರಿನಿಂದ ಪ್ರಖ್ಯಾತನಾದನು.

ಪುರಂದರದಾಸರು ಸಾಕ್ಷಾತ್ ನಾರದಮಹರ್ಷಿಯ ಅವತಾರವೆಂದು ಧರ್ಮಪರಾಯಣ ಭಕ್ತಜನರ ಅಭಿಪ್ರಾಯವಿದೆ. ಕರ್ನಾಟಕೀ ಸಂಗೀತಕ್ಕೆ ಅಸಾಮಾನ್ಯ ಅಂಶದಾನವಿತ್ತ ದಕ್ಷಿಣ ಭಾರತದಲ್ಲಿ ಭಕ್ತಿರಸಪೂರ್ಣ ಶಾಸ್ತ್ರೀಯ ಸಂಗೀತದ ಜನ್ಮದಾತರೇ ಪುರಂದರ ದಾಸರೆನ್ನಬಹುದು. ಇವರು ರಚಿಸಿದ "ಲಕ್ಷಣ ಗೀತ"ಗಳು ರಾಗನಿಯಮ ತಾಲಬದ್ಧವಾಗಿದ್ದು ಸ, ರಿ, ಗ, ಮ, ಸ್ವರಗಳ "ನೋಟೇಶನ್" ಸಹಿತವಾಗಿರುವುದು. "ಮಾಯಾಮಾಳವ ಗೌಳ" ರಾಗವು (ಹಿಂದುಸ್ಥಾನಿ ಪದ್ಧತಿಯಲ್ಲಿ ಪ್ರಾತಃ ಕಾಲದ "ಭೈರೊಂ" ರಾಗ) ಇದರಿಂದಲೇ ಪ್ರಚಲಿತವಾಯಿತೆನ್ನುತ್ತಾರೆ. ಇವರ "ಮಲಹಾರಿ" ರಾಗದ ಗೀತೆಗಳು ಪ್ರಾಥಮಿಕ ಸಂಗೀತ ಶಿಕ್ಷಕರಿಗೆ ಅವರ್ಜನೀಯವಾಗಿ ಉಪಯುಕ್ತವಾಗಿವೆ. "ಚತುರ್ದಂಡಿ ಪ್ರಕಾಶಿಕ"ದ ಎಪ್ಪತ್ತೆರಡು ಮೇಳಕರ್ತರಾಗದ ಪ್ರಮಾಣವು ವೆಂಕಟಮಖಿ (೧೬೬೦)ಯವ ರಿಂದ ರಚಿತವಾದದ್ದೆಂಬ ನಿರ್ಣಯವಿದ್ದರೂ ಪುರಂದರದಾಸರ ಒಂದು ಲಕ್ಷಣ ಗೀತೆಯಲ್ಲಿ "ಛತ್ತೀಸ್‌ರಾಗದ ದ್ವಿಗುಣ"ವೆಂಬ ಪ್ರಮಾಣವು ತೋರಿಬರುವ ಆಧಾರದಿಂದ ಈ "ಮೇಳ ಕರ್ತ ಚಕ್ರ"ವು ಪುರಂದರದಾಸರಿಂದಲೇ ಮೂಲ ರಚಿತವಾಗಿ, ಅನಂತರ ವೆಂಕಟಮಖಿಯವರಿಂದ ವಿಸ್ತರಿಸಲ್ಪಟ್ಟು ಪ್ರಚಲಿ ತವಾದುದೆನ್ನಬಹುದು

ಆಧುನಿಕ ದಕ್ಷಿಣಾತ್ಯ ಸಂಗೀತಾಚಾರ್ಯರ ಪ್ರಸಿದ್ಧ ತ್ಯಾಗರಾಜರ ಕೃತಿಗಳಲ್ಲಿ ಪರಂಪರಾವಶ ಪುರಂದರದಾಸರ ಗಾನ–ಪ್ರಬಂಧದ ಪರಿಣಾಮ ಕಾರಕ ಪ್ರಭಾವವು ಬಿದ್ದಂತೆ ಕಂಡುಬರುವುದು. ಸ್ವತಃ ತ್ಯಾಗರಾಜರು ತನ್ನ ಒಂದು ಕೀರ್ತನೆಯಲ್ಲಿ ಪುರಂದರದಾಸರ ಮಹತ್ವದ ಸಾದರ ಉಲ್ಲೇಖ ವನ್ನು ಮಾಡಿ ತನ್ನ ಶ್ರದ್ಧಾಂಜಲಿಯನ್ನು ಪ್ರಕಟಿಸಿರುವರು.

ಪುರಂದರ ದಾಸರ ಅನೇಕ ಗೀತಗಳಲ್ಲಿ "ನೃತ್ಯ ಸಂಗೀತ"ದ ಅಂಗ ವಿರುವುದರಿಂದ ಅವರು ನೃತ್ಯಕಲೆಯಲ್ಲಿಯೂ ಅನುಪಮ ನಿಪುಣತೆಯನ್ನು ಹೊಂದಿದ್ದರೆಂದು ಕಂಡುಬರುತ್ತದೆ. ಅವರ "ಕಲ್ಯಾಣಿ" ರಾಗದ "ಕೃಷ್ಣಾ ನೀ ಬೇಗನೆ ಬಾರೋ" ಎಂಬ ಗೀತವು ನೃತ್ಯಕ್ಕೆ ಅತ್ಯಂತ ಅನುಕೂಲವಾಗಿ ರುವ ಕಾರಣ ಈ ಪದ್ಯವು ನರ್ತಕ ನರ್ತಕಿಯರ ಪರಮ ಪ್ರಿಯ ಸಂಗೀತ ಸಾಹಿತ್ಯವಾಗಿರುವುದು. ಇದೇ ಪ್ರಕಾರ "ಶಂಕರಾಭರಣ" ರಾಗದ ಇನ್ನೊಂದು ಸುಂದರ ಗೀತಾರಚನೆ "ಪೋಗದಿರೆಲೋ ರಂಗಾ" ಪದ್ಯವು ಶಾಸ್ತ್ರೀಯ ಭರತ ನಾಟ್ಯಕ್ಕೆ ಅತೀ ಅನುಕೂಲವಾದ ಸಾಹಿತ್ಯವಾಗಿರುವುದು. ಈ ಅತ್ಯಂತ ಮನೋಹರ ದಿವ್ಯ ರಚನೆಗಳು ಪುರಂದರದಾಸರ ನರ್ತನದ ಸ್ಫೂರ್ತಿಯಿಂದಲೇ ಉದ್ಭವವಾಗಿರಬೇಕು. ಅವರ ಅಧ್ಯಾತ್ಮಿಕ ತನ್ಮಯ ತೆಯ ಸಮಯದಲ್ಲಿ ಸ್ವತಃ ಭಗವಾನ್ ಶ್ರೀಕೃಷ್ಣನು ಪ್ರತ್ಯಕ್ಷನಾಗಿ ಕ್ರೀಡೆ ಯನ್ನಾಡುತ್ತಿದ್ದನೆಂದು ಹೇಳುವುದಿದೆ. ಪರಮಾತ್ಮನನ್ನೊಲಿಸಲು ಅತಿ ಸುಲಭದ ಸಾಧನೆಯೆಂದರೆ ಸಂಗೀತ ಮತ್ತು ನರ್ತನದ ಕಲೆಗಳೆಂದು ಪುರಂದರದಾಸರು ವ್ಯಕ್ತಗೊಳಿಸಿರುವರು.

ಪುರಂದರ ದಾಸರಿಂದ ಅನೇಕ ಅಲೌಕಿಕ ಚಮತ್ಕಾರಿಕ ಘಟನೆಗಳಾ ಗಿರುವವೆಂಬ ಹಲವು ದಂತ ಕಥೆಗಳು ಅವರ ಚರಿತ್ರೆಯಲ್ಲಿವೆ. ಆದರೆ, ಅವರ ನಿಜವಾದ ಮಹತ್ವವು ಅವರ ಸಂಗೀತೋಪಾಸನೆಯಿಂದಲೇ ಪ್ರಜಲಿ ತವಾದುದೆಂಬುದಕ್ಕೆ ಸಂದೇಹವಿಲ್ಲ. ಕಲಾತ್ಮಕ ಗತಿ–ಪ್ರಗತಿ ಕಥಾ ಆಧ್ಯಾ ತ್ಮಿಕ ತನ್ಮಯತೆಯ ಜನ್ಮದಾತರಾದ ಪುರಂದರ ದಾಸರ ಕೀರ್ತಿಯು ಆಚಂದ್ರಾರ್ಕವಾಗಿ ಮೆರೆಯುವುದು!

■■■■■■■■■

# ೨. ಶ್ರೀ ತ್ಯಾಗರಾಜ ಸ್ವಾಮಿ

ತ್ಯಾಗರಾಜ! ಎಂತಹ ಪವಿತ್ರ ಹೆಸರು! ಎಂತಹ ಪ್ರಸಿದ್ಧ ಹೆಸರು! ಸಂಗೀತಪ್ರಿಯರಲ್ಲಿ ಈ ಹೆಸರನ್ನು ಕೇಳದಿದ್ದವರಾರು? ಸಂಗೀತ ಜಗತ್ತಿನ ಗಗನಮಂಡಲದಲ್ಲಿ ದಿವ್ಯ ನಕ್ಷತ್ರಗಳಂತೆ ಬೆಳಗುತ್ತಿರುವ ಬಾಚ್, ಬೀಥೋವಿನ್, ವೆಗ್ನರ್, ಹೆಂಡೆಲ್, ಮೋಝಾರ್ಟ್, ಪೆಡೆರಿಸ್ಕಿ, ಟೊಸ್ಕಾನಿನಿ, ಸ್ಟೊಕೊಸ್ಕಿ, ತಾನ್‌ಸೇನ್ ಮೊದಲಾದ ಜಗಜ್ಯೋತಿಗಳ ನಾಮಾವಳಿಯಲ್ಲಿ ತ್ಯಾಗರಾಜರ ಹೆಸರು ಸುವರ್ಣಾಕ್ಷರಗಳಿಂದ ಉಜ್ವಲವಾಗಿ ಬೆಳಗುತ್ತಿದೆ. ಹಿಂದುಸ್ಥಾನದಲ್ಲಂತೂ–ವಿಶೇಷತಃ ದಕ್ಷಿಣ ಹಿಂದುಸ್ಥಾನದಲ್ಲಿ–ತ್ಯಾಗರಾಜನನ್ನು ಅವತಾರಪುರುಷನೆಂಬ ಭಾವನೆಯಿಂದ ಪೂಜಿಸುತ್ತಿರುವರು. ಈ ಸಂಗೀತ ದೇವತೆಯ ಪಾವನ ಜೀವನಚರಿತ್ರೆಯು ಭಕ್ತಿರಸಭರಿತವಾಗಿದ್ದು, ಸಂಗೀತೋಪಾಸಕರಿಗೆ ಉತ್ಸಾಹಕಾರಕ ಹಾಗೂ ಜ್ಞಾನ ಪ್ರಕಾಶಕವಾಗಿರುವುದು.

ಕ್ರಿಸ್ತಶಕ ಹದಿನೇಳನೆ ಶತಮಾನದ ಉತ್ತರಾರ್ಧದಲ್ಲಿ ದಕ್ಷಿಣ ಭಾರತದ ತಂಜಾವೂರ್ ಜಿಲ್ಲೆಯ ತಿರುವಲ್ಲೂರ್ ಎಂಬ ಶಿವಕ್ಷೇತ್ರದಲ್ಲಿ "ಗಿರಿಜಾ ಬ್ರಹ್ಮಂ" ಎಂಬ ಭಾರದ್ವಾಜ ಗೋತ್ರದ ತ್ರೈಲಿಂಗ್ಯ ತೆಲುಗು ಬ್ರಾಹ್ಮಣ ಭಾಗವತನಿದ್ದನು. ಅನೇಕ ವೇದಾಂಕಿತ ಕೀರ್ತನೆಗಳ ರಚಯಿತನಾದ ಈ ಸಂಸ್ಕೃತ ಪಂಡಿತನು ತಂಜಾವೂರಿನ ಶಹಾಜಿ ರಾಜನ "ಆಸ್ಥಾನ ವಿದ್ವಾನ"ನಾಗಿದ್ದನು. ಈತನಿಗೆ ಐವರು ಮಕ್ಕಳು. ಇವರಲ್ಲಿ ಕೊನೆಯ ಮಗನ ಹೆಸರು "ರಾಮ ಬ್ರಹ್ಮಂ".

ರಾಮ ಬ್ರಹ್ಮನು ಚಿಕ್ಕಂದಿನಲ್ಲಿಯೇ ತನ್ನ ತಂದೆಯಿಂದ ಸಂಗೀತ ಶಿಕ್ಷಣವನ್ನು ಪಡೆದು, ಯೌವನ ತುಂಬುತ್ತಲೇ ಭಾಗವತ ವೃತ್ತಿಯನ್ನವಲಂಬಿಸಿ ಶಾಂತಿಯೆಂಬ ಕನ್ನಿಕೆಯನ್ನು ವಿವಾಹವಾಗಿ ಇಬ್ಬರು ಮಕ್ಕಳನ್ನು ಪಡೆದನು. ಹಿರಿಯವನ ಹೆಸರು ಜಪೇಶ ಅಥವಾ ಪಂಚಾನಂದ. ಕಿರಿಯವನೇ ತ್ಯಾಗರಾಜ. ಕ್ರಿಸ್ತಶಕ ೧೭೬೯ರಲ್ಲಿ (ಬಹುಧಾನ್ಯ ಸಂವತ್ಸರ) ಈ ಸುಪುತ್ರನ ಶುಭಜನನವಾಯಿತು.

ರಾಮ ಬ್ರಹ್ಮನು ಈ ಮಕ್ಕಳನ್ನು ಅತ್ಯಂತ ಅಕ್ಕರೆಯಿಂದ ಪಾಲಿಸಿ, ಚೌಲೋಪನಯನಾದಿಗಳನಂತರ ವಿದ್ಯಾಭ್ಯಾಸಕ್ಕಾಗಿ ಗುರುಕುಲಕ್ಕೆ ಕಳು



ಹಿದನು. ದುರದೃಷ್ಟವಶಾತ್ ಹಿರಿಯವನಾದ ಜಪೇಶನು ಮಂದಬುದ್ಧಿಯವನಾಗಿ ವಿದ್ಯೆಯ ಗಂಧವೇ ಹಿಡಿಯದೆ ದುಷ್ಕಾರ್ಯಗಳಲ್ಲಿ ಆಸಕ್ತನಾಗಿರುತ್ತಿದ್ದನು. ಆದರೆ ತ್ಯಾಗರಾಜನು ಕುಶಾಗ್ರ ಬುದ್ಧಿಯವನಾಗಿ ವಿದ್ಯಾಭ್ಯಾಸವನ್ನು ಮಾಡುತ್ತಾ ದೇವರ ಧ್ಯಾನದಲ್ಲಿಯೇ ಅನುರಕ್ತನಾಗಿರುತ್ತಿದ್ದನು.

ಹೀಗಿರುತ್ತ ಕಾರಣಾಂತರದಿಂದ ರಾಮಬ್ರಹ್ಮನ ಮನೆತನವು ತಿರುವಲ್ಲೂರಿನಿಂದ ಕಾವೇರಿ ನದಿ ತೀರದಲ್ಲಿರುವ ತಿರುವಯ್ಯಾರ್ ಎಂಬ ಪಟ್ಟಣಕ್ಕೆ ಸ್ಥಳಾಂತರವಾಯಿತು. ಐದು ಪವಿತ್ರ ನದಿಗಳಿಂದ ಕೂಡಿದ ತಿರುವಯ್ಯಾರ್ ಪುಣ್ಯಕ್ಷೇತ್ರವು "ದಕ್ಷಿಣ ಪಂಜಾಬ" ಅಥವಾ "ಪಂಚಾನದ"ವೆಂದು ಕರೆಯಲ್ಪಟ್ಟು ಅಂದಿನ ಸಂಸ್ಕೃತದ ವ ಲಲಿತಕಲಾ ವಿದ್ಯೆಯ ಪ್ರಸಿದ್ಧ ಕೇಂದ್ರಪೀಠವಾಗಿದ್ದಿತು. ಸುಪ್ರಸಿದ್ಧ ಗೋವಿಂದ ದೀಕ್ಷಿತರಿಂದ

ಸ್ಥಾಪಿಸಲ್ಪಟ್ಟ ಅಲ್ಲಿನ ವಿಶ್ವವಿದ್ಯಾಲಯದಲ್ಲಿ ತ್ಯಾಗರಾಜನ ವಿದ್ಯಾಭ್ಯಾಸವು ಮುಂದುವರಿಯಿತು. ತಕ್ಷಶಿಲೆಯ ವೈದ್ಯಶಾಸ್ತ್ರ, ನಳಂದದ ತರ್ಕಶಾಸ್ತ್ರ, ಉಜ್ಜಯಿನಿಯ ಜ್ಯೋತಿಷ ಸಿದ್ಧಾಂತ, ವಿಕ್ರಮಶಿಲೆಯ ತಂತ್ರಶಾಸ್ತ್ರ, ಕನೌಜದ ನಾಟಕ ವಾಙ್ಮಯ, ಬನಾರಸಿನ ವೇದಾಂತ ವಾಙ್ಮಯ ಮತ್ತು ಅಖಿಲ ಭಾರತದ ಸಂಗೀತ ಶಾಸ್ತ್ರ ಇವೇ ಮೊದಲಾದ ವಿವಿಧ ಕಲೆಗಳಲ್ಲಿ ಶಿಕ್ಷಣವನ್ನು ಪಡೆದು ನಾಲ್ಕಾರು ವರುಷಗಳಲ್ಲಿಯೇ ತ್ಯಾಗರಾಜನು ನಿಪುಣನಾದನು.

ಈ ಸಮಯದಲ್ಲಿ ಸೊಂಟಿ ವೆಂಕಟರಮಣಯ್ಯನೆಂಬ ಪ್ರಸಿದ್ಧ ವೀಣಾವಿದ್ವಾನನು ತಿರುವಯ್ಯಾರಿನ ಉತ್ತರ ಬೀದಿಯಲ್ಲಿ ವಾಸಿಸುತ್ತಿದ್ದನು. ತ್ಯಾಗರಾಜನು ಈ ವಿದ್ವಾನನ ವೀಣೆಯ ವಾದನವನ್ನು ಕೇಳಿ, ವಿದ್ಯಾಲಯದ ಶಿಕ್ಷಣವನ್ನು ತೊರೆದು, ಈ ವಿದ್ವಾಂಸನ ಶಿಷ್ಯನಾದನು. ಈ ಗುರುವಿನಿಂದ ಪುರಂದರದಾಸರ ಅನೇಕ ಕೀರ್ತನೆಗಳನ್ನು ಕಲಿತು ಅನುಗಾಲ ಸಂಗೀತದಲ್ಲಿಯೂ ದೇವರ ಧ್ಯಾನದಲ್ಲಿಯೂ ಮಗ್ನನಾಗಿರುತ್ತಿದ್ದನು.

ತ್ಯಾಗರಾಜನಿಗೆ ಹದಿನಾರು ವರುಷ ಪ್ರಾಯ ತುಂಬುತ್ತಲೇ ರಾಮಬ್ರಹ್ಮನು ಮೃತಪಟ್ಟನು. ಪಿತ್ರಾರ್ಜಿತ ಆಸ್ತಿಯಲ್ಲಿ ತಿರುವಯ್ಯಾರಿನ ಮನೆಯೂ ಕುಟುಂಬದ ಪೂಜೆಯ ಶ್ರೀ ರಾಮಚಂದ್ರನ ಮೂರ್ತಿಯೂ ತ್ಯಾಗರಾಜನ ಪಾಲಿಗೆ ಬಂದುವು. ಈ ಮನೋಹರ ಮೂರ್ತಿಯನ್ನು ನಿತ್ಯಲೂ ಭಕ್ತಿ ಶ್ರದ್ಧೆಗಳಿಂದ ಪೂಜಿಸುತ್ತಿರುತ್ತಾ ಒಂದು ದಿನ ತ್ಯಾಗರಾಜನಿಗೆ ಶ್ರೀ ರಾಮಚಂದ್ರನ ಲೀಲೆಯನ್ನು ಇಪ್ಪತ್ತನಾಲ್ಕು ಸಾವಿರ ಕೀರ್ತನೆಗಳಿಂದ ರಚಿಸಬೇಕೆಂಬ ವಿಚಿತ್ರ ಸಂಕಲ್ಪವಾಯಿತು. ಒಡನೆ ಸ್ಫೂರ್ತಿಭರಿತನಾಗಿ ಶ್ರೀ ಮಹಾಗಣಪತಿಯನ್ನು ಧ್ಯಾನಿಸುತ್ತಲೇ "ಗಿರಿರಾಜ ಸುತಾ ತನಯಾ" ಎಂಬ ಕೀರ್ತನೆಯು ತನ್ನ ಹೃದಯದಿಂದ ತನ್ನಷ್ಟಕ್ಕೇ ಉಕ್ಕಿಬಂದು, ಇದನ್ನು ವೈಮರೆತು ಹಾಡುತ್ತಲೇ ಶ್ರೀ ಗಣೇಶನು ಪ್ರತ್ಯಕ್ಷನಾಗಿ ವರದಾನವಿತ್ತಂತೇ ಭಾಸವಾಯಿತು!

ಇದಾದ ಕೆಲವು ದಿವಸಗಳಲ್ಲಿಯೇ ತ್ಯಾಗರಾಜನ ಮನೆಗೆ ಆತನ ಕೀರ್ತನೆಗಳನ್ನು ಕೇಳಲು ಒಬ್ಬ ಯತಿಯು ಬಂದನು. ತನ್ನ ಕೀರ್ತನೆಗಳನ್ನು ಕೇಳಿಸಿದ ನಂತರ ತ್ಯಾಗರಾಜನು ಈ ಯತಿಗೆ ಊಟೋಪಚಾರದ ಸೇವೆಯನ್ನು ಸ್ವೀಕರಿಸಬೇಕೆಂದು ಹೇಳಲು, ಯತಿಯು ಒಂದು ಗ್ರಂಥವನ್ನು

ತ್ಯಾಗರಾಜನ ವಶ ಕೊಟ್ಟು ನದಿಯಲ್ಲಿ ಸ್ನಾನವಮಾಡಿ ಬರುವೆನೆಂದು ಹೋದನು. ಹೀಗೆ ಹೋದ ಯತಿಯು ಹಿಂದಿರುಗಿ ಬಾರದಿದ್ದುದರಿಂದ ತ್ಯಾಗರಾಜನು ಆತನನ್ನು ಕಾಯುತ್ತ ಅಲ್ಲಿಯೇ ನಿದ್ರಾವಶನಾಗಿ ಒಂದು ಕನಸನ್ನು ಕಂಡನು. ಕನಸಿನಲ್ಲಿ ಶ್ರೀ ನಾರದನು ಸಾಕ್ಷಾತ್ಕರಿಸಿ, ತಾನೇ ಆ ಯತಿಯು— ಈ ಗ್ರಂಥವೇ ಪರಮೇಶ್ವರನಿಂದ ಪಾರ್ವತಿಯ ಸಲುವಾಗಿ ರಚಿತವಾದ "ಸಂಗೀತ ಸ್ವರಾರ್ಣವಂ." ಈ ದಿವ್ಯ ಗ್ರಂಥದಿಂದ ನಿನ್ನ ಇಷ್ಟ ಸಿದ್ಧಿಯಾಗುವದು ಎಂದು ಅಭಯವಿತ್ತಂತೆ ಭಾಸವಾಯಿತು.

ಅಂದಿನಿಂದ ತ್ಯಾಗರಾಜನ ಬಾಯಿಯಿಂದ ಸಹಜ ಮಾತುಗಳಂತೆ ದಿವ್ಯ ಕೀರ್ತನೆಗಳು ಹೊರಡುತ್ತಿದ್ದವು. ಈ ಕೀರ್ತನೆಗಳ ಪ್ರಚಾರ ಮಾಡುವ ಉದ್ದೇಶದಿಂದ ತ್ಯಾಗರಾಜನು ಪುಣ್ಯಕ್ಷೇತ್ರಗಳ ಯಾತ್ರೆಯನು ಮಾಡುತ್ತ ಪವಿತ್ರ ತಿರುಪತಿಗೆ ಮುಟ್ಟಿದನು. ದೇವಸ್ಥಾನದ ಬಾಗಿಲನ್ನು ಮುಚ್ಚಿದ್ದನ್ನು ಕಂಡು ತ್ಯಾಗರಾಜನು "ತೆರದೀ ಯಗ ರಾಧಾ" ಎಂಬ ಕೀರ್ತನೆಯನ್ನು ರಚಿಸಿ ಹಾಡುತ್ತಲೇ, ಬಾಗಿಲು ತನ್ನಷ್ಟಕ್ಕೆ ತೆರೆದು ಶ್ರೀ ವೆಂಕಟರಮಣನ ಮೂರ್ತಿಯ ದಿವ್ಯ ದರ್ಶನವಾಯಿತು.

ತಿರುಪತಿಯಿಂದ ಹಿಂತಿರುಗಿ ಬರುತ್ತಿರಲು ಕುಟುಂಬಸ್ಥನಾದ ಒಬ್ಬ ಬಡ ಭಿಕ್ಷುಕನು ಅಪಘಾತದಿಂದ ಬಾವಿಯಲ್ಲಿ ಬಿದ್ದು ಸತ್ತದ್ದನ್ನು ಕಂಡು "ಶ್ರೀ ರಾಮ ಪಾದಮಾ" ಎಂಬ "ಅಮೃತ ವಾಹಿನಿ" ರಾಗದ ಕೀರ್ತನೆಯನ್ನು ಹಾಡಿ, ಆತನನ್ನು ಪುನರುಜ್ಜೀವನಮಾಡಿದನು. ತೆಲುಗು ವ ತಮಿಳುನಾಡಿನಲ್ಲಿ ಅಪಘಾತದಿಂದ ನರಳುತ್ತಿರುವ ಜನರು ಈಗಲೂ ತಮ್ಮ ರಕ್ಷಣೆಗಾಗಿ ಈ ಕೀರ್ತನೆಯನ್ನು ಅತಿ ಭಕ್ತಿಯಿಂದ ಹಾಡಿ ಶ್ರೀ ರಾಮನನ್ನು ಭಜಿಸುತ್ತಾರೆ. ಅಲ್ಲದೆ ಈ "ಅಮೃತ ವಾಹಿನಿ" ರಾಗಕ್ಕೆ ಮೃತಪಟ್ಟವನನ್ನು ಪುನರ್ಜೀವಗೊಳಿಸುವ ದಿವ್ಯಶಕ್ತಿಯಿರುವುದೆಂದು ಗ್ರಂಥಾಧಾರಗಳಿವೆ.

ಕೊವೂರ್ ಎಂಬ ಪಟ್ಟಣದ ಒಬ್ಬ ಶ್ರೀಮಂತನಲ್ಲಿ ಕೆಲವು ದಿವಸಗಳ ವಾಸಮಾಡಿ ಹಿಂತಿರುಗಿ ಅರಣ್ಯಮಾರ್ಗವಾಗಿ ಪ್ರಯಾಣವನ್ನು ಬೆಳೆಸುತ್ತಿರುವಾಗ ತ್ಯಾಗರಾಜನ ಪಲ್ಲಕ್ಕಿಯನ್ನು ದರೋಡೆಕೋರರು ತಡೆದು ತ್ಯಾಗರಾಜನನ್ನು ಕೊಲೆಮಾಡುವ ಪ್ರಯತ್ನಮಾಡುತ್ತಿರಲು "ರಘುವೀರಾ ರಣಧೀರಾ" ಎಂಬ ಕೀರ್ತನೆಯನ್ನು ರಚಿಸಿ ಹಾಡಲು ಇಬ್ಬರು ದಿವ್ಯ ಪುರುಷರು

ಬಂದು ಬಿಲ್ಲು ಬಾಣಗಳಿಂದ ದರೋಡೆಕೋರರನ್ನು ಓಡಿಸಿದರು. ಈ ದಿವ್ಯ ಪುರುಷರೇ ಶ್ರೀ ರಾಮಲಕ್ಷ್ಮಣರೆಂಬ ಭಾವನೆಯು ಭಕ್ತಜನರಲ್ಲಿದೆ.

ಹೀಗೆ ಅನೇಕ ಕೀರ್ತನೆಗಳನ್ನು ರಚಿಸಿ ಪರಮಾತ್ಮನ ಭಕ್ತಿಯಲ್ಲಿಯೇ ಇರುತ್ತಿದ್ದ ತ್ಯಾಗರಾಜನ ಕೀರ್ತನೆಗಳು ದೇಶದಲ್ಲೆಲ್ಲಾ ಹರಡಿ ತ್ಯಾಗರಾಜನು ಮಹಾ ಕೀರ್ತಿವಂತನಾದನು. ಅನೇಕರು ಆತನ ಶಿಷ್ಯರಾಗಿ ಸಂಗೀತವನ್ನು ಕಲಿತು ಪ್ರಖ್ಯಾತರಾದರು. ಇವರಲ್ಲಿ ಈ ಹದಿನಾಲ್ಕು ಭಾಗವತರು ತ್ಯಾಗರಾಜನ ಶ್ರೇಷ್ಠ ಶಿಷ್ಯರು:

೧. ಗಣೇಶಯ್ಯ ಗಾರು,
೨. ಸುಬ್ಬರಾವು ಭಾಗವತರ್.
೩. ಸೋಜರಿ ಸೀತಾರಾಮಯ್ಯಾ.
೪. ತಿರುವತ್ತಿಯೂರ್ ಕುಪ್ಪಯ್ಯಗಾರು.
೫. ಉಮಯಾಪುರಂ ಕೃಷ್ಣಯ್ಯರ್.
೬. ಉಮಯಾಪುರಂ ಸುಂದರಯ್ಯರ್.
೭. ಶಿಲ್ಲೈಸ್ಥಾನಂ ರಾಮಯ್ಯಂಗಾರ್.
೮. ತಿರುವಯ್ಯಾರ್ ಅಯ್ಯಾವಯ್ಯರ್.
೯. ನೇಮಂ ಸುಬ್ರಮಣ್ಯಯ್ಯ.
೧೦. ನಂಗಾವರಂ ನೀಲಕಂಠಯ್ಯ.
೧೧. ವಾಲಾಜಾಪೇಟ್ ವೆಂಕಟರಮಣ ಭಾಗವತರ್.
೧೨ ಮನಂಬು ಚಾವಡಿ ವೆಂಕಟಸುಬ್ಬಯ್ಯಗಾರು.
೧೩. ಕನ್ನಯ್ಯ ಭಾಗವತರ್.
೧೪. ಅಮೃತ ಲಿಂಗಂ ಪಿಳ್ಳೆ.

ಈ ಶಿಷ್ಯರಿಂದಲೇ ತ್ಯಾಗರಾಜರ ಕೀರ್ತನೆಗಳು ಮತ್ತು ಕರ್ನಾಟಕಿ ಸಂಗೀತವೂ ದಕ್ಷಿಣ ಭಾರತದಲ್ಲಿ ಪ್ರಚಾರವಾಯಿತು. ತ್ಯಾಗರಾಜರಿಂದ ಸಾವಿರಾರು ದಿವ್ಯ ಕೀರ್ತನೆಗಳಲ್ಲದೆ ಅನೇಕ ಸಂಗೀತ ಸಾಹಿತ್ಯ ಗ್ರಂಥಗಳೂ ರಚಿತವಾದುವು. ಅವುಗಳಲ್ಲಿ "ದಿವ್ಯ ನಾಮಾವಳಿ" "ರಾಗರತ್ನ ಮಾಲಿಕಾ" "ಪ್ರಹ್ಲಾದ ಭಕ್ತ ವಿಜಯಂ" "ನೌಕಾ ಚರಿತ್ರಂ" ಮತ್ತು "ಪಂಚರತ್ನ" ವೆಂಬ ಗ್ರಂಥಗಳು ಪ್ರಕಟಿತವಾಗಿರುವವು. ತಿರುವಾಂಕೂರ್ ಮಹಾರಾಜನ ಆಸ್ಥಾನ ಗಾಯಕ ಪ್ರಸಿದ್ಧ ಗೋವಿಂದ ಮಾರಾರನು ತ್ಯಾಗರಾಜನನ್ನು

ಸಂದರ್ಶಿಸಿದಾಗ, ಗೋವಿಂದ ಮಾರಾರನ "ಷಟ್ಕಾಲ ಲಯದ ವರ್ಣಗಳ ಸಂಗೀತ"ದ ವಿಚಿತ್ರ ಕುಶಲತೆಯನ್ನು ಕೇಳಿ ವಿಸ್ಮಿತನಾಗಿ ರಚಿಸಿದ "ಎಂತರೋ ಮಹಾನುಭಾವುಲು", "ನಟ", "ಗೌಳ", "ಆರಭಿ" ಮತ್ತು "ವರಾಳಿ" ವರ್ಣಗಳ ಸಂಗ್ರಹವು "ಪಂಚ ರತ್ನ"ವೆಂದು ಹೆಸರಾಂಕಿತವಾದುದು.

ತ್ಯಾಗರಾಜನು ೮೮ ವರುಷ ಕಾಲ ದೀರ್ಘಾಯುಷ್ಯವನ್ನು ಅನುಭವಿಸಿ ಕ್ರಿಸ್ತಶಕ ೧೮೪೭ರಲ್ಲಿ ಕೈಲಾಸಯಾತ್ರೆಗೈದನು. ಉತ್ತರ ಹಿಂದುಸ್ಥಾನದಲ್ಲಿ ಹರಿದಾಸ ಸ್ವಾಮಿ ಮತ್ತು ತಾನಸೇನನ ಪದವಿಯು ದಕ್ಷಿಣ ಭಾರತದಲ್ಲಿ ತ್ಯಾಗರಾಜನಿಗೆ ಸಲ್ಲುವದು. ಜಗತ್ತಿನಲ್ಲಿ ಸಂಗೀತವು ಇರುವ ವರೇಗೂ ತ್ಯಾಗರಾಜನ ಹೆಸರು ಆಚಂದ್ರಾರ್ಕವಾಗಿ ಮೆರೆಯುವುದು.

▪▪▪▪▪▪▪▪▪

# ೩. ರಾಣಿ ಮೀರಾಬಾಯಿ

ಸಂಗೀತ ಸುವರ್ಣ ಯುಗದ ಮತ್ತೊಂದು ದಿವ್ಯಜ್ಯೋತಿಯು ಮೇವಾಡದ ಮಹಾರಾಣಿ ಮೀರಾಬಾಯಿ; ಈ ಭಗವದ್ಭಕ್ತ ಶಿರೋಮಣಿಯ ಕೀರ್ತಿಯು ಆಚಂದ್ರಾರ್ಕವಾಗಿ ಮೆರೆಯುತ್ತಲಿದೆ. ಅಖಿಲ ಹಿಂದುಸ್ಥಾನದ ಅಬಾಲವೃದ್ಧ ಸ್ತ್ರೀಪುರುಷರು ಇವಳ ಪವಿತ್ರ ಪದಗಳನ್ನು ಅನುದಿನವೂ ಹೃದಯಾನಂದದಿಂದ ಹಾಡುತ್ತಲಿರುವರು. ಪ್ರಾತಃಸ್ಮರಣೀಯ ಪ್ರಭು ಚರಣಾನುರಾಗಿಣಿ ಮೀರಾಬಾಯಿಯ ಭಜನಾವಳಿಗಳು ಇಂದು ಸಂಗೀತ ಸಾಹಿತ್ಯದ ಅಮೂಲ್ಯ ರತ್ನಗಳಾಗಿವೆ. ಇವಳ ದಿವ್ಯ ಕಾವ್ಯರಚನೆಗಳು ಕಬೀರ್, ರಮಾನಂದ, ರಾಯಿದಾಸ್, ತುಲಸಿದಾಸ್, ಸೂರದಾಸ್, ಇತ್ಯಾದಿ ಮಹಾತ್ಮರ ಕವಿತೆಗಳ ತರಗತಿಯಲ್ಲಿವೆ! ನಭಿದಾಸ ತಥಾ ಪ್ರಿಯಾದಾಸರ "ಭಕ್ತ ಮಾಲಾ" ಗ್ರಂಥದಲ್ಲಿಯೂ, ಧ್ರುವದಾಸರ "ಭಕ್ತ ನಾಮಾವಳಿ"ಯಲ್ಲಿಯೂ ಈ ಮಹಾ ಮಹಿಳೆಯ ಉಲ್ಲೇಖಗಳಿವೆ! ಅಯೋಧ್ಯಾ, ಚಿತ್ರಕೂಟ, ಮಥುರಾ, ವೃಂದಾವನ, [redacted] ಪಾವನ ಭೂಮಿಗಳನ್ನು ಪವಿತ್ರ ಭಕ್ತಿಯ ಪ್ರವಾಹದಲ್ಲಿ ಮುಳುಗಿಸಿ ತನ್ನ ದಿವ್ಯ ಸಂಗೀತ ನೃತ್ಯದ ಪ್ರಭಾವದಿಂದ ಪ್ರತ್ಯಕ್ಷ ಶ್ರೀಕೃಷ್ಣ ಪರಮಾತ್ಮನನ್ನು ನಿತ್ಯವೂ ನಲಿದಾಡಿಸುತ್ತಿದ್ದ [redacted] ಈ ಮಹಿಳಾಮಣಿ ಮೀರೆಯು ಯಾರು? ಇವಳ ಚರಿತ್ರೆಯನ್ನು ನೋಡೋಣ.

ವಿಕ್ರಮಾದಿತ್ಯ, ಕಾಳಿದಾಸ, ಶ್ರೀ ಹರ್ಷ, ಕವಿ ಜಗನ್ನಾಥ, ತಾನ್‌ಸೇನ್ ಮೊದಲಾದ ಭಾರತದ ದಿವ್ಯಜ್ಯೋತಿಗಳ ವಿಶ್ವಸನೀಯ ಜೀವನ ಚರಿತ್ರೆಗಳು ನಮ್ಮ ಇತಿಹಾಸಗಳಲ್ಲಿ ಸಿಗುವುದು ಅತಿ ವಿರಳವೆಂದು ನಾವು ಕೇಳಿದ್ದೇವೆ. ಅದರಂತೆ ಮೀರಾಬಾಯಿಯ ಆಧಾರಭೂತ ಜೀವನ ಚರಿತ್ರೆಯು ಕೂಡಾ ಇಲ್ಲವೆಂದೇ ಹೇಳಬಹುದು. ಅನೇಕ ಮತಭೇದಗಳೂ ಭಿನ್ನಾಭಿಪ್ರಾಯಗಳೂ ಇರುವ ಹಲವು ಗ್ರಂಥಗಳ ತಾರತಮ್ಯಾನುಸಾರ ಆಧಾರಗಳಿಂದ ಕೆಳಗಿನ ಚರಿತ್ರೆಯು ಪೋಣಿಸಲ್ಪಟ್ಟಿದ್ದಾಗಿರುತ್ತದೆ. ಇದನ್ನು ವಿಶ್ವಸನೀಯವಾಗಿ ಸ್ವೀಕರಿಸಬಹುದೆಂದು ಲೇಖಕನ ಪರಿಭಾವನೆ.

ಸಾಧಾರಣ ೧೬ನೇ ಶತಮಾನದ ಮಧ್ಯಭಾಗದಲ್ಲಿ ರಜಪುತಾನದ ಮಾರ್ವಾಡ ರಾಜಧಾನಿಯನ್ನಾಳುತ್ತಿದ್ದ ರಾಣಾ ರಾವ್ ರತ್ತನ್‌ಸಿಂಗನ ಉದರದಲ್ಲಿ ಸಂವತ್ ೧೫೫೫—ಕ್ರಿ. ಶ. ೧೫೬೦ರಲ್ಲಿ ಮೀರೆಯು ಜನ್ಮವೆತ್ತಿದಳು. ಬಾಲ್ಯಾವಸ್ಥೆಯಲ್ಲಿಯೇ ಈ ಮುದ್ದು ಮಗುವಿಗೆ ಸಂಗೀತದ ಆಕರ್ಷಣವು ಅತಿರೇಕವಾಗಿದ್ದಿತ್ತು. ಸಂಗೀತದ ಮಧುರವಾಣಿಯನ್ನು ಕೇಳಿದೊಡನೆ ಎಂತಹ ಅಳುವನ್ನೂ ಥಕ್ಕನೆ ನಿಲ್ಲಿಸುತ್ತಿದ್ದಳು. ಮಗುವಿನ ಲಾಲನೆ ಪಾಲನೆಯ ಸಲುವಾಗಿ ರತ್ತನ್‌ಸಿಂಗನು “ಚಂಪಾ” “ಛಮೇಲಿ” ಎಂಬ ಇಬ್ಬರು ಸಂಗೀತ ಕಲಾವಂತೆಯರನ್ನು ದಾಸಿಯರಾಗಿ ಇಟ್ಟಿದ್ದನು. ಅವರ ಇಂಪಾದಸಂಗೀತದಲ್ಲಿ ಈ ಸ್ತ್ರೀರತ್ನವು ಬೆಳೆಯಿತು. ಒಂದು ದಿನ, ಮಗುವು ಐದನೆ ವರ್ಷ ಪ್ರಾಯದಲ್ಲಿ, ಕಿಟಕಿಯಿಂದ ಒಂದು ಮದುವೆಯ ಮೆರವಣಿಗೆಯನ್ನು ನೋಡಿ, ತನ್ನ ತಾಯಿಯೊಡನೆ “ಅಮ್ಮಾ, ನನ್ನ ವರನು ಎಲ್ಲಿರುವನು?’’ ಎಂದು ಕೇಳಿದಳು. ಮೀರೆಯ ತಾಯಿಯು ನಸುನಗುತ್ತಾ ಅಲ್ಲಿಯೇ ಮಂಟಪದಲ್ಲಿದ್ದ ಶ್ರೀ ಕೃಷ್ಣನ ಮೂರ್ತಿಯನ್ನು ತೋರಿಸಿ, ‘‘ಅಗೋ, ಆ ಸುಂದರ ಗಿರಿಧರ ಗೋಪಾಲನೇ ನಿನ್ನ ವರನು!’’ ಎಂದಳು. ಮೂರ್ತಿಯನ್ನು ನೋಡುತ್ತಲೇ ಮೀರೆಯ ಚಿತ್ತಾಕರ್ಷಣವಾಯಿತು. ಅಂದಿನಿಂದ ಮೀರೆಯು ಮೂರ್ತಿಯನ್ನು ಅರೆಗಳಿಗೆಯೂ ಬಿಟ್ಟಿರಲಾರಳು. ಗಿರಿಧರಲಾಲನನ್ನು ನಿತ್ಯವೂ ಶೃಂಗರಿಸುತ್ತಾ, ಹಾಡುತ್ತಾ ಕುಣಿಯುತ್ತಾ, ಅವನ ಧ್ಯಾನದಲ್ಲಿಯೇ ಲೀನಳಾಗಿ ಕಾಲಕಳೆಯುತ್ತಿದ್ದಳು. ಹೀಗಿರುತ್ತಾ ಸ್ವಲ್ಪ ಸಮಯದಲ್ಲಿಯೇ ಮೀರೆಯ ತಾಯಿಯು ಕಾಲಾಧೀನಳಾದಳು. ರಾಣಾ ರತ್ತನ್ ಸಿಂಗನು ಅನುಗಾಲವೂ

ಸಮರಗಳ ಗೊಂದಲದಲ್ಲಿರುತ್ತಿದ್ದುದರಿಂದ ಮೀರೆಯ ಅಜ್ಜನಾದ ರಾಣಾ ರಾವ್ ದೂದಾಜಿಯು ಮೀರೆಯನ್ನು ತನ್ನ ಅರಮನೆಗೆ ಕರದೊಯ್ದು ತನ ಮುದ್ದಿನ ಸಾಕಣೆ ಮಗಳಾಗಿ ಸಲಹಿದನು. ಅಲ್ಲಿ ಅವಳಿಗೆ ಒಳ್ಳೆ ಸಂಗೀತ ಕಲಾ ಕೌಶಲ್ಯದ ವಿದ್ಯಾಭ್ಯಾಸವು ದೊರೆಯಿತು. ಹೀಗಿರುತ್ತ ಒಂದು ದಿನ ಒಬ್ಬ ಬೈರಾಗಿಯು ಭಿಕ್ಷೆಗೋಸ್ಕರ ಅರಮನೆಗೆ ಬಂದನು ಅವನ ಹತ್ತಿರ ಒಂದು ಕೃಷ್ಣನ ಮೂರ್ತಿಯು ಇದ್ದಿತು. ಈ ಮೂರ್ತಿಯನ್ನು ಮೀರೆಯು ನೋಡಿ ತನ್ನ ತಂದೆಯ ಮನೆಯಲ್ಲಿದ್ದ ಮೂರ್ತಿಯು ಇದೇ ಇರಬಹುದೆಂದು ಭಾವಿಸಿ ಅದನ್ನು ತನಗೆ ಕೊಡಬೇಕೆಂದು ಬೇಡಿಕೊಂಡಳು. ಬೈರಾಗಿಯು, ಇದಕ್ಕೋಸ್ಕರವಾಗಿಯೇ ಬಂದಂತೆ, ಮೂರ್ತಿಯನ್ನು ಮೀರೆಯ ವಶ ಕೊಟ್ಟುಹೋದನು. ಅಂದಿನಿಂದ ಪುನಹ ಲಾಲ ಗಿರಿಧರ ನಲ್ಲಿ ಮೀರೆಗೆ ಮೊದಲಿಗಿಂತ ಇಮ್ಮಡಿಯಾದ ಭಕ್ತಿಭಾವ-ಪ್ರೀತಿಯು ಹುಟ್ಟಿ, ಹಗಲಿರುಳೂ ಅವನ ಧ್ಯಾನದ ಬ್ರಹ್ಮಾನಂದದಲ್ಲಿ ಮುಳುಗಿಕೊಂಡಿರು ತ್ತಿದ್ದಳು. ಮೀರೆಯ ಈ ವರ್ತನೆಯನ್ನು ನೋಡಿ ರಾಯ್ ದೂದಾಜಿಯವ ರಿಗೆ, ಇವಳಿಗೆ ಬೇಗನೆ ಮದುವೆ ಮಾಡಬೇಕೆಂಬ ವಿಚಾರ ಹೊಳೆಯಿತು. ಹದಿಮೂರನೆ ವರ್ಷ ಪ್ರಾಯ ತುಂಬುತ್ತಲೇ ಚಿತ್ತೂರಿನ ಮಹಾರಾಜ ರಾಣಾಸಂಗನ ಹಿರೇ ಪುತ್ರ ಯುವರಾಜ ಭೋಜರಾಜನಿಗೆ ಕೊಟ್ಟು ಮೀರೆಯ ವಿವಾಹವಾಯಿತು.

ಮೀರೆಯು ಚಿತ್ತೂರಿನ ಯುವರಾಣಿಯಾದರೂ ಕೃಷ್ಣನ ಮೂರ್ತಿ ಯನ್ನು ಬಿಟ್ಟಿರಲಿಲ್ಲ. ಪತಿಯೊಡನೆ ಸತಿಯ ಧರ್ಮದಿಂದಿರುತ್ತಿದ್ದರೂ ಆಕೆಯ ಆತ್ಮಪ್ರೇಮವು ಗಿರಿಧರ ನಾಗರನಲ್ಲಿಯೇ ಇದ್ದಿತು. ಚಿತ್ತೂರಿನ ರಾಜಸ್ಥಾನವು ಆಗ ಸಂಗೀತಕ್ಕೆ ಪ್ರಖ್ಯಾತಿಗೊಂಡಿದ್ದಿತು. ಬಾಲ್ಯದಲ್ಲಿಯೂ ಕೌಮಾರ್ಯದಲ್ಲಿಯೂ ಕಲಿತ ಸಂಗೀತ ವಿದ್ಯೆಯನ್ನು ಮುಂದುವರಿಸಲು ಇಲ್ಲಿ ಮೀರೆಗೆ ಒಳ್ಳೆಯ ಆಸ್ಪದ ದೊರೆಯಿತು; ಈ ಕಲಾಕೌಶಲದಲ್ಲಿ ಅದ್ವಿತೀಯ ನಿಪುಣತೆ ಹೊಂದಿದಳು. ಜಯದೇವನ "ಗೀತಾಗೋವಿಂದ" ಸಂಗೀತ ಶಾಸ್ತ್ರ ಗ್ರಂಥದ ಟೀಕೆಯನ್ನು ಆಕೆ, "ರಾಜಸ್ಥಾನಿ" ಭಾಷೆಯಲ್ಲಿ ಇದೇ ಸಮ ಯದಲ್ಲಿ ಬರೆದದ್ದಾಗಿ ಕಂಡುಬರುತ್ತದೆ. ಭಗವಾನ್ ಶ್ರೀಕೃಷ್ಣನೇ ಮೀರೆಯ ಸಂಗೀತದ ಸಚ್ಚಿದಾನಂದ ಸದ್ಗುರುವೆಂದೂ ಹೇಳುವದುಂಟು.

ರಾಣಿವಾಸದ ವೈಭವಗಳನ್ನು ತ್ಯಜಿಸಿ ನಿರಂತರ ಭಕ್ತಿಭಜನೆಯಲ್ಲಿ ಮಗ್ನಳಾಗಿರುತ್ತಿದ್ದ ಮೀರೆಯ ವರ್ತನೆಯು ಅವಳ ನಾದಿನಿಗೆ ಸಂತೋಷದ,

ವೈಮನಸ್ಸಿನಿಂದ ಮೀರೆಯನ್ನು ಪೀಡಿಸತೊಡಗಲು, ಅರಮನೆಯೊಳಗೆ ಅಂತಃಕಲಹಗಳು ಬೆಳೆಯದಂತೆ ಮೀರೆಯು ಸಮೀಪದ ಶ್ರೀ ಕೃಷ್ಣ ಮಂದಿರಕ್ಕೆ ಹೋಗಲಾರಂಭಿಸಿದಳು. ಈ ಸಮಯದಲ್ಲಿ ದೇಶ ಸಂಚಾರದಲ್ಲಿದ್ದ ಭಕ್ತ ರಾಯಿದಾಸ ಚಮಾರರು ಚಿತ್ತೂರಿಗೆ ಆಗಮಿಸಿದರು. ಶ್ರೀ ಕೃಷ್ಣ ಮಂದಿರದಲ್ಲಿ ಮೀರೆಗೆ ಈ ಸತ್ಪುರುಷರ ದರ್ಶನವಾಗಿ ಅವರ ಮಂತ್ರೋಪದೇಶ ದೊರೆಯಿತು. ಇದನ್ನು ಕೇಳಿ ನಾದಿನಿಯ ವೈರತ್ವವು ಮತ್ತೂ ಬೆಳೆಯಿತು. ಆದರೆ, ಮೀರೆಯು ಇದನ್ನು ಲಕ್ಷಿಸಲಿಲ್ಲ ನಿತ್ಯವೂ ಮಂದಿರಕ್ಕೆ ಹೋಗಿ ಬಹಿರಂಗವಾಗಿ ಭಜನೆ ನರ್ತನಗಳನ್ನು ಮಾಡಿ ಅಲ್ಲಿ ನೆರೆಯುತ್ತಿದ್ದ ಭಕ್ತಜನ ಮಂಡಳಿಗೆ ಬ್ರಹ್ಮಾನಂದದಲ್ಲೇ ತೇಲಿಸುತ್ತಿದ್ದಳು. ಸ್ವಲ್ಪ ಸಮಯದಲ್ಲಿಯೇ ಮೀರೆಯ ಕೀರ್ತಿಯು ಇಡೀ ಹಿಂದುಸ್ಥಾನದಲ್ಲಿ ಹಬ್ಬಿತು.

ಅಕ್ಬರ್ ಬಾದಶಹನು ಮೀರಾಬಾಯಿಯ ಅದ್ವಿತೀಯ ಸಂಗೀತದ ಕೀರ್ತಿಯನ್ನು ಕೇಳಿ, ಒಂದು ದಿನ ತಾನ್‌ಸೇನನೊಡನೆ ಇದರ ಪ್ರಸ್ತಾಪವನ್ನೆತ್ತಿದನು. ತಾನ್‌ಸೇನನಿಗೂ ಮೀರೆಯ ಸಂಗೀತವನ್ನು ಕೇಳುವ ಮಹತ್ವಾಕಾಂಕ್ಷೆ ಇದ್ದಿತು. ಆದರೆ, ಈ ಇಚ್ಛೆಯನ್ನು ಪೂರೈಸುವ ಬಗೆ ಹೇಗೆ? ಮುಸಲ್ಮಾನರಿಗೂ ಮೇವಾಡದ ರಜಪೂತರಿಗೂ ಮೊದಲಿಂದಲೇ ಕಡು ವೈರತ್ವ! ಅದರಲ್ಲಿಯೂ ಮುಸಲ್ಮಾನ ಬಾದಶಹನು ಚಿತ್ತೂರಿಗೆ ಹೋಗಿ ಈ ರಜಪೂತ ರಾಣಿಯನ್ನು ಸಂದರ್ಶಿಸುವುದೆಂದರೆ ಪ್ರಾಣಾಪಾಯವೇ ಸರಿ! ಹಿಂದೊಮ್ಮೆ ಪದ್ಮಿನಿಯ ಪ್ರಕರಣದಲ್ಲಾದ ಮುಸ್ಲಮಾನ-ರಜಪೂತರ ಘೋರ ಯುದ್ಧವು, ಅದರಿಂದಾದ ಅನಾಹುತಗಳು ಇನ್ನೂ ಸ್ಮೃತಿಪಟಲದಿಂದ ಅಳಿಸಿರಲಿಲ್ಲ. ಆದರೂ ವಿಶ್ವಪ್ರಯತ್ನ ಮಾಡಿಯಾದರೂ ಈ ಇಚ್ಛೆಯನ್ನು ಪೂರೈಸಲೇಬೇಕೆಂಬ ನಿರ್ಧಾರದಿಂದ ಅಕ್ಬರ್, ತಾನ್‌ಸೇನರು ಒಂದು ಉಪಾಯವನ್ನು ಹೂಡಿದರು. ಇಬ್ಬರೂ ಬೈರಾಗಿಗಳ ವೇಷವನ್ನು ಧರಿಸಿ "ಶ್ರೀರಾಮ ಜೈರಾಮ್" ಎಂದು ಭಜನೆಮಾಡುತ್ತ ಢಿಲ್ಲಿಯಿಂದ ಚಿತ್ತೂರಿಗೆ ಪ್ರಯಾಣ ಬೆಳೆಸಿದರು.

ಹೇಗೂ ಸುರಕ್ಷಿತರಾಗಿ ಚಿತ್ತೂರಿಗೆ ಬಂದು ಮುಟ್ಟಿದರು. ಸಂತ ಮಂಡಳಿಯೊಡನೆ ಕೂಡಿಕೊಂಡು ಶ್ರೀಕೃಷ್ಣ ಮಂದಿರವನ್ನು ಹೊಕ್ಕರು. ಮೀರಾಬಾಯಿಯ ದಿವ್ಯ ದರ್ಶನವಾಯಿತು! ಇಬ್ಬರೂ ಮೀರಾಬಾಯಿಯ ಹರ್ಷೋನ್ಮಾದಕ ಸಂಗೀತದ ಸ್ವರ್ಗಸುಖದಲ್ಲಿ ಲೀನರಾಗಿ ಮೈಮರೆತರು;

ತಾನ್‌ಸೇನನಿಗೆ ತಾನು ರಚಿಸಿದ "ಮಿಯಾಮಲ್ಹಾರ್" ರಾಗವು ಮಲ್ಹಾರಗಳಲ್ಲಿ ಅತಿ ಶ್ರೇಷ್ಠವೆಂಬ ಹೆಮ್ಮೆ ಇದ್ದಿತು. ಆದರೆ, ಈಗ ಮೀರಾಬಾಯಿಯ "ಮೀರಾಬಾಯಿನ್ ಮಲ್ಹಾರ್" ರಾಗವನ್ನು ಕೇಳಿ ತಾನಸೇನನು, "ತಾನೇ-ತನ್ನದೇ" ಎಂಬೀ ಅಭಿಪ್ರಾಯವನ್ನು ಆಗಲೇ ಅಲ್ಲೇ ತಿದ್ದಿಕೊಳ್ಳಬೇಕಾಯಿತು ಮ್ಹಲಾರ್ ರಾಗದಲ್ಲಿ ೧೨ ಪ್ರಕಾರಗಳಿವೆ: ೧ ಶುದ್ಧ ಮಲ್ಹಾರ್; ೨. ಮೇಘ ಮಲ್ಹಾರ್; ೩. ಗೌಡ ಮಲ್ಹಾರ್; ೪. ಸೂರದಾಸಿ ಮಲ್ಹಾರ್; ೫. ರಾಮದಾಸಿ ಮಲ್ಹಾರ್; ೬ ಮಿಯಾಕಿ ಮಲ್ಹಾರ್; ೭ ಮೀರಾಬ್ಯಾಕಿ ಮಲ್ಹಾರ್; ೮. ಧೂಲಿಯಾ ಮಲ್ಹಾರ್; ೯. ಚಜರ್ೂಕಿ ಮಲ್ಹಾರ್; ೧೦. ಚಂಚಲ್‌ಸಾ ಮಲ್ಹಾರ್; ೧೧. ನಟ ಮಲ್ಹಾರ್ ಮತ್ತು ೧೨. ದೇಸಿ ಮಲ್ಹಾರ್. ತಾನ್‌ಸೇನನೂ ಧಿಲ್ಲಿಯ ಸಾಮ್ರಾಟನೂ, ಇಬ್ಬರೂ ಮೀರಾಬಾಯಿಯ ಚರಣಗಳಿಗೆ ಸಾಷ್ಟಾಂಗ ನಮಸ್ಕಾರಮಾಡಿದರು. ವೈಮರೆತ ಅಕ್ಬರನು ತನ್ನ ಕೊರಳಲ್ಲಿ ಅಡಗಿದ್ದ ನವರತ್ನದ ಹಾರವನ್ನು ತೆಗೆದು ಮೀರಾಬ್ಯಾಯ ಚರಣಕ್ಕೆರಗಿದನು. ಈ ಹಾರವನ್ನು ನೋಡಿ ಮೀರಾಬಾಯಿಗೆ ಸಂಶಯವಾಗಿ 'ಬೈರಾಗಿಗಳ ಹತ್ತಿರ ನವರತ್ನದ ಹಾರವಿರುವ ಬಗೆ ಎಂತು?' ಎಂದು ಪ್ರಶ್ನಿಸಲು, ಅಕ್ಬರನು "ಯಮುನಾನದಿಯಲ್ಲಿ ಸ್ನಾನ ಮಾಡಿ ಬರುತ್ತಿರುವಾಗ ದಂಡೆಯ ಮೇಲೆ ಈ ಹಾರವು ಸಿಕ್ಕಿತು. ಇದನ್ನು ಶ್ರೀಕೃಷ್ಣನಿಗೆ ಕಾಣಿಕೆಯಾಗಿ ಅರ್ಪಿಸುವೆವು—ಸ್ವೀಕಾರಮಾಡಿ ಅನುಗ್ರಹಿಸಬೇಕು" ಎಂದು ಅರಿಕೆಮಾಡಿದನು. ಸಾಧ್ವಿಶಿರೋಮಣಿಯು ಇದನ್ನು ನಂಬಿ ಹಾರವನ್ನು ಮೂರ್ತಿಯ ಕೊರಳಲ್ಲಿ ಅರ್ಪಿಸಿದಳು. ಅಂತು, ತಮ್ಮ ಮಹತ್ವಾಕಾಂಕ್ಷೆಯನ್ನು ಪೂರೈಸಿ "ಬೈರಾಗಿಗಳು" ಧಿಲ್ಲಿಗೆ ಹಿಂತಿರುಗಿ ಸುರಕ್ಷಿತವಾಗಿ ತಲ್ಪಿದರು.

ಆದರೆ, ಈ ನವರತ್ನದ ಹಾರದಿಂದ ಮೀರಾಬಾಯಿಗೆ ಗೂಢ ಅನಾಹುತ ಒದಗಿತು. ಅಕ್ಬರ್-ತಾನಸೇನರು ಮೀರಾಬಾಯಿಯ ದರ್ಶನ ಮಾಡಿದ ವರ್ತಮಾನವು ಕ್ರಮಶಃ ಬಹಿರಂಗವಾಯಿತು. ಇದು ಭೋಜರಾಜನ ಕಿವಿಗೆ ಬಿತ್ತು. ನಾದಿನಿಗೆ ಮೀರೆಯ ಮೇಲಿದ್ದ ವೈರತ್ವವನ್ನು ಸಾಧಿಸಲಿಕ್ಕೆ ಇದು ಒಳ್ಳೆಯ ಸಂದರ್ಭವಾಯಿತು. ಭೋಜರಾಜನಿಗೆ ದುರ್ಬೋಧನೆಯನ್ನು ಕೊಟ್ಟಳು. "ಬಹಿರಂಗದ ಭಜನೆ! ಚಮಾರನ (ಭಕ್ತ ರಾಯಿದಾಸನ) ಉಪದೇಶ! ಅಕ್ಬರನ ರತ್ನದ ಹಾರ! ರಜಪೂತ

ಕುಲಕ್ಕೆ ಕಲಂಕ!'' ಇದನ್ನೆಲ್ಲಾ ಕೇಳಿ ಭೋಜರಾಜನು ರೇಗಿದನು. ಮೀರಾಬಾಯಿಗೆ ನದಿಯಲ್ಲಿಹಾರಿ ಪ್ರಾಣಹತ್ಯಮಾಡಿಕೊಳ್ಳಬೇಕೆಂದು ಆಜ್ಞಾಪಿಸಿದನು! ಪತಿಯನ್ನು ಸತಿಯು ಮೀರಬಲ್ಲಳೇ? ಮೀರೆಯು ಪ್ರಾಣಹತ್ಯಕ್ಕೆ ಹೊರಟಳು. ಸಾಯಂಕಾಲದ ಹೊತ್ತು—ಹಾರುವ ಮೊದಲು ನದಿಯ ತೀರದಲ್ಲಿ ನಿಂತು ಗಿರಿಧರ ನಾಗರನ ನೆನವರಿಕೆ ಮಾಡುತ್ತಲೇ ಸಮೀಪದ ಕೃಷ್ಣಮಂದಿರದ ಘಂಟಾನಾದವು ಕೇಳಿಸಿತು. ಶ್ರೀಕೃಷ್ಣನು ಕರೆಯುತ್ತಿದ್ದಂತೇ ಭಾಸವಾಯಿತು--ಬಂದ ಉದ್ದೇಶವನ್ನು ಮರೆತು ಹಿಂತಿರುಗಿ ಮಂದಿರಕ್ಕೆ ಹೊಕ್ಕಳು— ಪೂಜೆಯನ್ನಾರಂಭಿಸಿದಳು— ಸಂಗೀತ ನೃತ್ಯಗಳಲ್ಲಿ ಮೈಮರೆತು ಆರತಿಯನ್ನೆತ್ತುತ್ತಲೇ, ಪರಮಾತ್ಮ ಗಿರಿಧರಲಾಲನು ಪ್ರತ್ಯಕ್ಷನಾಗಿ ಈ ರೀತಿ ಅಭಯವಿತ್ತಂತೆ ತಿಳಿದಳು: "ನಿನ್ನ ಮರ್ತ್ಯಪತ್ನಿಯೊಡನೆ ನಿನ್ನ ಜೀವನವು ಇಲ್ಲಿಗೆ ಸಮಾಪ್ತಿಯಾಯಿತು! ಇನ್ನು ನೀನು ನನ್ನವಳಾದೆ! ವೃಂದಾವನದಲ್ಲಿ ನನ್ನೊಡನೆ ಸದಾಕಾಲ ವಿರಾಜಿಸುತ್ತಿರು, ನಡೆ!''

ಮೀರಾ, ನೆಟ್ಟಗೆ ಅಲ್ಲಿಂದ ವೃಂದಾವನಕ್ಕೆ ತೆರಳಿದಳು. ಇತ್ತ ಭೋಜರಾಜನು ಸಂಗ್ರಾಮದಲ್ಲಿ ಅಕಾಲ ಮೃತ್ಯುವಿಗೆ ತುತ್ತಾಗಿ ಕಾಲವಶವಾದನು. ಮೀರೆಯ ಮೈದುನ ರಾಣಾ ವಿಕ್ರಮಾದಿತ್ಯ ಕುಂಭನು ಚಿತ್ತೂರಿನ ಪಟ್ಟವನ್ನೇರಿದನು. ಮೀರೆಯು ವೃಂದಾವನದಲ್ಲಿ ಜೀವಂತವಿದ್ದಾಳೆಂದು ಕೇಳಿ ಅವಳನ್ನು ನಾಶಮಾಡುವ ಅನೇಕ ಕರಾಳ ಉಪಾಯಗಳನ್ನು ಹೂಡಿದನು. ಹೂವಿನ ಕುಕ್ಕೆಯಲ್ಲಿ ಹಾವನ್ನಿಟ್ಟು ಮೀರೆಗೆ ಕಳುಹಿಸಿದನು. ಮೀರೆಯ ಸ್ಪರ್ಶದಿಂದ ಹಾವು ಸಾಲಿಗ್ರಾಮವಾಯಿತು! ವಿಷದ ಹಾಲನ್ನು ಕಳುಹಿಸಿದನು—ವಿಷವು ಅಮೃತವಾಯಿತು! ವಿಷದ ಮುಳ್ಳುಗಳುಳ್ಳ ಹಾಸಿಗೆಯನ್ನು ಕಳುಹಿಸಿದನು—ಮುಳ್ಳುಗಳು ಸುಗಂಧ ಪುಷ್ಪಗಳಾದುವು! ಪ್ರಹ್ಲಾದನಂತೆ ಮೀರೆಯು ಪರಮಾತ್ಮನಿಂದ ರಕ್ಷಿಸಲ್ಪಟ್ಟಳು. ಮೀರೆಯ ಕೀರ್ತಿಯು ಅಮರವಾಯಿತು. ಪರಮಾತ್ಮನ ದಿವ್ಯಜ್ಯೋತಿಯಲ್ಲಿ ತನ್ನ ಆತ್ಮಜ್ಯೋತಿಯನ್ನರ್ಪಿಸಿ "ಮೀರಾಕೇ ಪ್ರಭು ಗಿರಿಧರ ನಾಗರ ಜ್ಯೋತಮೆ ಜ್ಯೋತ ಮಿಲಾಯಾ'' ಎಂದು ಹಾಡುತ್ತ, ಮೀರಾಬಾಯಿಯು ಗಿರಿಧರ ಗೋಪಾಲನಲ್ಲಿ ಐಕ್ಯಳಾದಳು.

ರಾಣಿ ಮೀರಾಬಾಯಿಯು ಗಿರಿಧರ ಗೋಪಾಲನ ಸಮಕ್ಷಮ ಭಾವಾವೇಶದಿಂದ ಹಾಡುತ್ತ ನಲಿಯುತ್ತಿರುವಾಗ, ಅವಳ ಕಂಠವು ಸುಸ್ವರ—

ಸುಮಾಧುರ್ಯವನ್ನೆ ಅಪ್ರತಿರೂಪಾದಿಯಲ್ಲಿ ಹೊರಸೂಸುತ್ತಿರಲು, ಅತ್ಯುಚ್ಚ ಅಮರ ಸಂಗೀತವಾಗುತ್ತಿತ್ತು. ರಾಣಿ ಮೀರಾಬಾಯಿಯು ಇಂದು ಹಲವು ಕಡೆಗಳಲ್ಲಿ ಕೃಷ್ಣಭಕ್ತೆಯೆಂದು ಪ್ರಸಿದ್ಧಳಾಗಿರುವಳಾದರೂ ಸಂಗೀತ ಜಗತ್ತಿಗೆ ಅವಳೊಪ್ಪಿಸಿದ ಸೇವೆ ಹಾಗೂ ಅಂಶದಾನವು ಅಸಾಮಾನ್ಯವಿದೆ. ಸಂಗೀತವಿರುವಷ್ಟು ಕಾಲ ಮೀರಾಬಾಯಿಯ ಹೆಸರೂ ಅಮರವಾಗಿರುವುದು.

ಗ್ರಂಥಾಧಾರಗಳು: ೧. ಅತಿಯಾ ಬೇಗಮರ "ಸಂಗೀತ್ ಒಫ್ ಇಂಡಿಯ" ೨. ಗೌರಿಶಂಕರ ಓಜಾರವರ "ಉದಯಪುರ ರಾಜಾಕಾ ಇತಿಹಾಸ್." ೩. "ಕಾಶಿ ನಗರಿ ಪ್ರಚಾರಿಣಿ ಪತ್ರಿಕಾ" ಜನವರಿ ೧೯೧೫ ಭಾಗ ೧. ೪. ಹಿಂದಿ ಸಾಹಿತ್ಯರತ್ನ ವಿಷ್ಣು ಕುಮಾರಿ ಶ್ರೀವಾತ್ಸವರ "ಮೀರಾ ಪದ್ಯಾವಲಿ." ೫. ಆರ್. ಸಿ. ತಾಂಡನರ "ಸೋಂಗ್ಸ್ ಒಫ್ ಮೀರಾಬಾಯಿ." ೬. ಪ್ರೀತಮ್ ಸಿಂಗರ "ಸೇಂಟ್ಸ್ ಎಂಡ್ ಸೇಜಸ್ ಒಫ್ ಇಂಡಿಯಾ." ೭. ಅಕ್ಬರನ ಇತಿಹಾಸ (ಐನ್ ಇ ಅಕ್ಬರಿ) ೮. ಪಂಡಿತ್ ಭಾತ್ಖಂಡೆಯವರ "ಹಿಂದುಸ್ಥಾನಿ ಸಂಗೀತ ಪದ್ಧತಿ—ಭಾಗ ೬."



Edited, Printed & Published by K. V. Shenoy
at the Prabhat Printers, Ltd., Mangalore.